## ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಮರಿತಿಬ್ಬೇಗೌಡ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1866

ಉತ್ತರಿಸಬೇಕಾದ ದಿನಾಂಕ : 24.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಪಿಕಾರ್ಡ್ ಬ್ಯಾಂಕುಗಳಿಂದ ರೈತರು ಪಡೆದ ಸಾಲದ ಸಂಬಂಧ ದಾಮ್‌ದುಪ್ಪಟ್ಟು ಯೋಜನೆಯನ್ನು ಸರ್ಕಾರದಿಂದ ಜಾರಿಗೆ ತರಲಾಗಿದೆಯೇ; | ಹೌದು, |
| ಆ | ದಾಮ್‌ದುಪ್ಪಟ್ಟು ಯೋಜನೆಯ ರೂಪು ರೇಷೆಗಳೇನು; ( ವಿವರ ನೀಡುವುದು). | ಸರ್ಕಾರದ ದಾಮ್‌ದುಪ್ಪಟ್ಟು ಯೋಜನೆಯಡಿ ಅಸಲಿಗಿಂತ ಹೆಚ್ಚು ಬಡ್ಡಿಯನ್ನು ಮರುಪಾವತಿಸಿದ ರೈತರ ಬಾಕಿ ಅಸಲನ್ನು ಹಾಗೂ ಬಡ್ಡಿಯನ್ನು ಮನ್ನಾ ಮಾಡುವ ಯೋಜನೆಯಾಗಿದ್ದು, ರೈತರು ಪಡೆದ ಅವಧಿ ಸಾಲದ ಅಸಲಿನ ಮೊತ್ತಕ್ಕಿಂತ ಹೆಚ್ಚು ಮೊತ್ತವನ್ನು ಬಡ್ಡಿ ರೂಪದಲ್ಲಿ ದಿನಾಂಕ 31.03.2004 ಕ್ಕೆ ಪಾವತಿಸಿದ್ದಲ್ಲಿ ಬಾಕಿ ಉಳಿದಿರುವ ಸಾಲವನ್ನು (ಅಸಲು ಮತ್ತು ಬಡ್ಡಿ ಒಳಗೊಂಡಂತೆ) ಮನ್ನಾ ಮಾಡಲು ಕೆಲವು ಷರತ್ತುಗಳಿಗೊಳಪಟ್ಟು ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/109/ಸಿಎಲ್ಎಸ್/2004, ದಿನಾಂಕ 04.03.2005 ರಡಿ ನೀಡಲಾಗಿದೆ. |
| ಇ | ಸದರಿ ಯೋಜನೆಯ ಫಲಾನುಭವಿಗಳ ಸಂಖ್ಯೆ ಎಷ್ಟು; ಈ ಸಂಬಂಧ ಸರ್ಕಾರ ಪಿಕಾರ್ಡ್ ಬ್ಯಾಂಕುಗಳಿಗೆ ಪಾವತಿ ಮಾಡಿರುವ ಒಟ್ಟು ಮೊತ್ತವೆಷ್ಟು; | ದಾಮ್‌ದುಪ್ಪಟ್ಟು ಯೋಜನೆಯ ಒಟ್ಟು ಫಲಾನುಭವಿಗಳ ಸಂಖ್ಯೆ 31,911 ಆಗಿದ್ದು, ಕ್ಲೈಂ ಬಿಲ್ಲುಗಳ ಮೊತ್ತ ಸರ್ಕಾರದಿಂದ ಬಿಡುಗಡೆಯಾಗಿರುವ ವಿವರ ಈ ಕೆಳಕಂಡಂತಿರುತ್ತದೆ.<br>(ರೂ.ಲಕ್ಷಗಳಲ್ಲಿ)<br>ಕ್ರ.ಸಂ. / ವಿವರ / ಮೊತ್ತ<br>1 / ಕಸ್ಕಾರ್ಡ್ ಬ್ಯಾಂಕಿನ ಕ್ಲೈಂ / 6021.45<br>2 / ಬಿಡುಗಡೆಯಾದ ಮೊತ್ತ / 4539.08<br>3 / ಬಿಡುಗಡೆಗೆ ಬಾಕಿ ಇರುವ ಮೊತ್ತ / 1482.37 |
| ಈ | ಸದರಿ ಯೋಜನೆಯ ಫಲಾನುಭವಿಗಳಿಗೆ ಮುಂದುವರೆದ ಬಾಕಿ ಬಡ್ಡಿಯನ್ನು ಸರ್ಕಾರ ಇದುವರೆವಿಗೂ ಪಾವತಿಸದೇ ಇರಲು ಕಾರಣಗಳೇನು; ಹಾಗೂ ಪಾವತಿಸಬೇಕಾದ ಒಟ್ಟು ಮೊತ್ತವೆಷ್ಟು; (ವಿವರ ನೀಡುವುದು) | ಈ ಯೋಜನೆಯಲ್ಲಿ ಬ್ಯಾಂಕಿಗೆ ರೂ.14.82 ಕೋಟಿ ಕ್ಲೈಂ ಮೊತ್ತ ಸರ್ಕಾರದಿಂದ ಬಿಡುಗಡೆಯಾಗಲು ಬಾಕಿ ಇರುತ್ತದೆ. ಸರ್ಕಾರದ ದಿನಾಂಕ:27-04-2005 ರ ಬಡ್ಡಿ ಮನ್ನಾ ಆದೇಶವನ್ನು ಅನುಸರಿಸಿ ಗ್ರಾಮೀಣ ಗೃಹ ನಿರ್ಮಾಣ ಮತ್ತು ಕೃಷಿಯೇತರ ಯೋಜನೆಗಳಲ್ಲಿ ನೀಡಿದ ಸಾಲಗಳ ಕ್ಲೈಂ ಬಿಲ್ಲುಗಳನ್ನು ಮಹಾಲೇಖಪಾಲರು ಆಕ್ಷೇಪಿಸಿದ ಹಿನ್ನೆಲೆಯಲ್ಲಿ ಸರ್ಕಾರದಿಂದ ಬ್ಯಾಂಕುಗಳಿಗೆ ಬಿಡುಗಡೆಗೆ ಬಾಕಿ ಇದ್ದ ರೂ.14.82 ಕೋಟಿಗಳನ್ನು ತಡೆಹಿಡಿಯಲಾಗಿದೆ. ದಿನಾಂಕ:17.10.2013 ರಂದು ಅಂದಿನ ಸನ್ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಯಲ್ಲಿ ಈ ಬಗ್ಗೆ ಚರ್ಚಿಸಿ ಈ ವಿಷಯವು ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಪರಿಶೀಲನೆಗೆ ಒಳಪಟ್ಟಿದ್ದು ಇತ್ಯರ್ಥಕ್ಕೆ ಬಾಕಿ |

| | | |
|---|---|---|
| | | ಇರುವುದರಿಂದ ಆಕ್ಷೇಪಿಸಿರುವ ಮೊತ್ತ ರೂ.8.82 ಕೋಟಿಗಳನ್ನು ಹೊರತುಪಡಿಸಿ ಉಳಿದ ರೂ.6.00 ಕೋಟಿಗಳನ್ನು ಕೂಡಲೇ ಬಿಡುಗಡೆ ಮಾಡಲು ಅಗತ್ಯ ಕ್ರಮವನ್ನು ಸರ್ಕಾರದ ಹಂತದಲ್ಲಿ ತೆಗೆದುಕೊಳ್ಳಬೇಕೆಂದು ನಿರ್ಣಯಿಸಿ ಆದೇಶಿಸಲಾಗಿದೆ. ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಶಿಫಾರಸ್ಸಿನಂತೆ ರೂ.6.00 ಕೋಟಿ ಪಾವತಿಸಲು ಬಾಕಿ ಉಳಿದಿದೆ. |
| ಆ) | ಯಾವ ಕಾಲ ಮಿತಿಯಲ್ಲಿ ಬಾಕಿ ಮೊತ್ತವನ್ನು ಪಾವತಿಸಲಾಗುವುದು. | ರೂ.6.00 ಕೋಟಿಗಳನ್ನು ಬಿಡುಗಡೆ ಮಾಡುವ ಕುರಿತ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. ನಿಯಮಾನುಸಾರ ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳಲಾಗುವುದು. |

**ಸಂಖ್ಯೆ : ಸಿಒ 154 ಸಿಎಲ್‌ಎಸ್ 2020**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು